## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಕರ್ನಾಟಕ ಭೂ ಕಬಳಿಕೆ ನಿಷೇಧ ವಿಧೇಯಕ 2007ನ್ನು ಈ ಮುಂದಿನ ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆಯೊಂದಿಗೆ ಕರ್ನಾಟಕ ರಾಜ್ಯ ವಿಧಾನಮಂಡಲದ ಎರಡೂ ಸದನಗಳಿಂದ ಅಂಗೀಕರಿಸಲಾಗಿತ್ತು, ಎಂದರೆ:–

"ಸರ್ಕಾರಕ್ಕೆ, ಸ್ಥಳೀಯ ಪ್ರಾಧಿಕಾರಕ್ಕೆ, ವಕ್ಫ್‌ಗಳೂ ಸೇರಿದಂತೆ ಒಂದು ಧಾರ್ಮಿಕ ಅಥವಾ ಧರ್ಮಾದಾಯ ಸಂಸ್ಥೆಗೆ ಅಥವಾ ದತ್ತಿಗೆ ಸೇರಿದ ಭೂಮಿಗಳನ್ನು ಕೆಲವು ಕಾನೂನು ವಿರೋಧಿ ವ್ಯಕ್ತಿಗಳು ಒಬ್ಬರೇ ಮತ್ತು ಗುಂಪುಗಳಲ್ಲಿ ಬಲಾತ್ಕಾರದಿಂದ ಅಥವಾ ಮೋಸದಿಂದ ಅಥವಾ ಇನ್ನಾವುದೇ ರೀತಿಯಿಂದ, ಕಬಳಿಸುವುದಕ್ಕೆ ಸಂಘಟಿತ ಪ್ರಯತ್ನ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ. ಈ ಭೂಕಬಳಿಕೆದಾರರು ನಕಲಿ ಗೃಹ ನಿರ್ಮಾಣ ಸಹಕಾರಿ ಸಂಘಗಳನ್ನು ರಚಿಸುತ್ತಿದ್ದಾರೆ ಅಥವಾ ಸುಳ್ಳು ಕ್ಲೇಮುಗಳನ್ನು ಸೃಷ್ಟಿಸುತ್ತಿದ್ದಾರೆ ಮತ್ತು ನೀತಿಗೆಟ್ಟ ಸ್ಥಿರಾಸ್ತಿ ವ್ಯಾಪಾರಿಗಳ ಮೂಲಕವಾಗಿ ಅಥವಾ ಅನ್ಯಥಾ ಅಂಥ ಭೂಮಿಗಳನ್ನು ಭಾರಿ ಪ್ರಮಾಣದಲ್ಲಿ ಹಾಗೂ ಹಿಂದೆಂದೂ ಇಲ್ಲದ ರೀತಿಯಲ್ಲಿ ಮೋಸದಿಂದ ಜನತೆಯ ಕೆಲವು ವರ್ಗಕ್ಕೆ ಮಾರಾಟ ಮಾಡುತ್ತಿದ್ದಾರೆ ಹಾಗೂ ಇದರಿಂದ ಈ ಭೂಕಬಳಿಕೆದಾರರ ಬಳಿ ಲೆಕ್ಕಕ್ಕೇ ಸಿಗದ ಸಂಪತ್ತು ಯಥೇಚ್ಛವಾಗಿ ಸಂಗ್ರಹವಾಗುತ್ತಿದೆ. ರಾಜ್ಯದಲ್ಲಿ ಭೂಕಬಳಿಕೆದಾರರ ಇಂಥ ಕಾನೂನುಬಾಹಿರ ಚಟುವಟಿಕೆಗಳಿಂದಾಗಿ, ಸಾರ್ವಜನಿಕ ಸುವ್ಯವಸ್ಥೆಯ ಮೇಲೆ, ಅದರಲ್ಲೂ ನಗರ ಮತ್ತು ನಗರೀಕರಣಕ್ಕೆ ಯೋಗ್ಯವಾದ ಭೂಮಿಗಳ ಮೇಲೆ, ದುಷ್ಪರಿಣಾಮ ಆಗುತ್ತಿರುವುದರಿಂದ, ರಾಜ್ಯ ಸರ್ಕಾರವು ಅಂಥ ಕಾನೂನು ಬಾಹಿರ ಚಟುವಟಿಕೆಗಳನ್ನು ತಡೆಗಟ್ಟಲು ಈ ಸಂಬಂಧದಲ್ಲಿ ಒಂದು ವಿಶೇಷ ಕಾನೂನನ್ನು ಕೂಡಲೇ ಜಾರಿಗೆ ತರುವುದು ಅವಶ್ಯಕವೆಂದು ಪರಿಗಣಿಸಿದೆ.

ಆದ್ದರಿಂದ, ಭೂ ಕಬಳಿಕೆಯ ಚಟುವಟಿಕೆಗಳನ್ನು ನಿಷೇಧಿಸಿ ಅದಕ್ಕೆ ಸಂಬಂಧಿಸಿದ ವಿಷಯಗಳಿಗೆ ಉಪಬಂಧವನ್ನು ಕಲ್ಪಿಸಲು ಕರ್ನಾಟಕ ರಾಜ್ಯ ಸರ್ಕಾರವು, ಕರ್ನಾಟಕ ಭೂ ಕಬಳಿಕೆ (ನಿಷೇಧ) ಅಧಿನಿಯಮವನ್ನು ಜಾರಿಗೆ ತರಲು ಉದ್ದೇಶಿಸಿದೆ. ಭೂ ಕಬಳಿಕೆಯನ್ನು ಕಾನೂನು ಬಾಹಿರವೆಂದು ಘೋಷಿಸುವುದಷ್ಟೆ ಅಲ್ಲದೆ ಅಂಥ ಭೂಕಬಳಿಕೆಯನ್ನು ನಿಷೇಧಿಸಲು ಸಹ ರಾಜ್ಯ ಸರ್ಕಾರವು ಉದ್ದೇಶಿಸಿದೆ. ಆದ್ದರಿಂದ ಈ ಅಧಿನಿಯಮವನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವ ಉದ್ದೇಶದಿಂದ ಭೂ ಕಬಳಿಕೆಯ ಸಂಬಂಧದ ಅಪರಾಧಕ್ಕಾಗಿ ದಂಡವನ್ನು ವಿಧಿಸಲು ಹಾಗೂ ಆರೋಪಿತ ಭೂ ಕಬಳಿಕೆ ಕೃತ್ಯದ ಶೀಘ್ರ ವಿಚಾರಣೆ ನಡೆಸುವುದಕ್ಕಾಗಿ ಮತ್ತು ಕಬಳಿಕೆ ಮಾಡಲಾದ ಭೂಮಿಯ ಮಾಲೀಕತ್ವದ ಹಾಗೂ ಅದರ ಹಕ್ಕು ಮೂಲದ ಅಥವಾ ಕಾನೂನುಬದ್ಧ ಸ್ವಾಧೀನತೆಯ ಬಗ್ಗೆ ಮೊಕದ್ದಮೆಯ ಅಧಿವಿಚಾರಣೆಯನ್ನು ನಡೆಸಲು ವಿಶೇಷ ನ್ಯಾಯಾಲಯವನ್ನು ಅಧಿಸೂಚನೆಯ ಮೂಲಕ ರಚಿಸುವುದಕ್ಕಾಗಿ ಉಪಬಂಧವನ್ನು ಕಲ್ಪಿಸಲು ಸಹ ಪ್ರಾಸ್ತಾವಿಸಲಾಗಿದೆ. ಪ್ರಾಸ್ತಾವಿತ ಶಾಸನವನ್ನು ಜಾರಿಗೊಳಿಸುವುದರಿಂದ ರಾಜ್ಯ ಸರ್ಕಾರಕ್ಕೆ ಅಕ್ರಮ ಭೂ ಕಬಳಿಕೆಯನ್ನು ತಡೆಹಿಡಿಯಲು ಸಾಧ್ಯವಾಗುವುದೆಂದು ಭಾವಿಸಲಾಗಿದೆ."

ತದನುಸಾರವಾಗಿ, ಕರ್ನಾಟಕ ಭೂ ಕಬಳಿಕೆ (ನಿಷೇಧ) ವಿಧೇಯಕ, 2007ನ್ನು ರಾಜ್ಯ ವಿಧಾನಮಂಡಲದ ಉಭಯ ಸದನಗಳಿಂದ ಅನುಮೋದಿವಾದಂತೆ, ರಾಷ್ಟ್ರಪತಿಗಳ ಸಮ್ಮತಿಯನ್ನು ಪಡೆಯಲು ಭಾರತ ಸರ್ಕಾರಕ್ಕೆ ಕಳುಹಿಸಲಾಗಿತ್ತು.

ಭಾರತ ಸರ್ಕಾರವು, ತನ್ನ ಪತ್ರ ಸಂಖ್ಯೆ 17/20/2007–ಜೆಯುಡಿಎಲ್ ಮತ್ತು ಪಿಪಿ ದಿನಾಂಕ 16/20.08.2007ರಲ್ಲಿ ನಿಗಮಿತ ವ್ಯವಹಾರಗಳ ಮಂತ್ರಾಲಯವು ಮಾಡಿದ ಸಲಹೆಗಳನ್ನು ಕುರಿತಂತೆ, ಕರ್ನಾಟಕ ಭೂ ಕಬಳಿಕೆ (ನಿಷೇಧ) ವಿಧೇಯಕ, 2007ಕ್ಕೆ ಮಾರ್ಪಾಡುಗಳನ್ನು ಸೂಚಿಸಿತ್ತು. ತದನುಸಾರವಾಗಿ ವಿಧೇಯಕದ 6ನೇ ಖಂಡವನ್ನು ಕಂಪನಿ ಮತ್ತು ನಿರ್ದೇಶಕರು ಎಂಬ ಪದಾವಗಳಿಗೆ ವಿವರಣೆಯನ್ನು ಸೇರಿಸುವುದರ ಮೂಲಕ ಮಾರ್ಪಾಡುಗೊಳಿಸಲಾಗಿದೆ.

ಪತ್ರ ಸಂಖ್ಯೆ 17/20/2007–ಜೆಯುಡಿಎಲ್ ಮತ್ತು ಪಿಪಿ ದಿನಾಂಕ 18–06–2010ರ ಮೇರೆಗೆ ಭಾರತ ಸರ್ಕಾರವು, ಅಲ್ಪಸಂಖ್ಯಾತ ವ್ಯವಹಾರಗಳ ಮಂತ್ರಾಲಯವು ಮಾಡಿದ ಸಲಹೆಗಳನ್ನು ಕುರಿತಂತೆ, ವಿಧೇಯಕದ 2ನೇ ಖಂಡದ (2)ನೇ ಉಪಖಂಡಕ್ಕೆ ಅಲ್ಲದೆ, ಕಾನೂನು ವ್ಯವಹಾರಗಳ ಇಲಾಖೆಯಿಂದ ಮಾಡಿದ ಸಲಹೆಗಳನ್ನು ಕುರಿತಂತೆ ವಿಧೇಯಕದ 1ನೇ ಖಂಡದ (2)ನೇ ಉಪಖಂಡಕ್ಕೆ ಮಾರ್ಪಾಡುಗಳನ್ನು ಸೂಚಿಸಿತ್ತು. ತದನುಸಾರವಾಗಿ, ರಾಜ್ಯ ಸರ್ಕಾರವು ತನ್ನ ಪತ್ರ ಸಂಖ್ಯೆ ಡಿಪಿಎಎಲ್ 22 ಶಾಸನ 2007 ದಿನಾಂಕ 7–9–2010ರ ಮೇರೆಗೆ, ವಕ್ಫ್, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳಿಗೆ ಸೇರಿದ ಭೂಮಿಗಳಿಗೆ ಉಪಬಂಧಗಳನ್ನು ವಿಸ್ತರಿಸುವ ಮೂಲಕ ವಿಧೇಯಕವನ್ನು ತಿದ್ದುಪಡಿ ಮಾಡುವ ಮೂಲಕ ಸದರಿ ಮಾರ್ಪಾಡುಗಳನ್ನು ಮಾಡುವುದಕ್ಕೆ ತನ್ನ ಒಪ್ಪಿಗೆಯನ್ನು ನೀಡಿ ಸದರಿ ವಿಧೇಯಕಕ್ಕೆ ರಾಷ್ಟ್ರಪತಿಗಳ ಸಮ್ಮತಿಯನ್ನು ಪಡೆಯಲು, ಅಲ್ಲದೆ, ಅಧ್ಯಾದೇಶದ ರೂಪದಲ್ಲಿ ಹೊರಡಿಸಬೇಕಾದ ಮಾರ್ಪಾಡುಗಳಿಗೆ ಪೂರ್ವ ಅನುದೇಶವನ್ನು ಪಡೆಯಲು ಕೋರಿಕೊಂಡಿತ್ತು.

ಭಾರತ ಸರ್ಕಾರವು ತನ್ನ ಪತ್ರ ಸಂಖ್ಯೆ 17/20/2007–ಜೆಯುಡಿಎಲ್ ಮತ್ತು ಪಿಪಿ ದಿನಾಂಕ: 03–03–2010/2011ರ ಮೇರೆಗೆ, ಹಾಲಿಯಿರುವ ವಿಧೇಯಕ (2007ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 27) ನ್ನು ಹಿಂದಕ್ಕೆ ಪಡೆಯಲು ಪರ್ಯಾಲೋಚಿಸಿ, ಯಾವುದೇ ತಿದ್ದುಪಡಿ ಅಧ್ಯಾದೇಶದ ಸಮವರ್ತಿ ಸಮಾಪನೆಗಾಗಿ ಬದಲಾಗಿ ಮಾರ್ಪಾಟಾದ ವಿಧೇಯಕವನ್ನು ಸಲ್ಲಿಸಲು ನಿರ್ದೇಶಿಸಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದಾಗಿ ರಾಜ್ಯದ ಬೊಕ್ಕಸಕ್ಕೆ ಅಂದಾಜು, 1,69,07,452–00 ರೂಪಾಯಿಗಳ ವೆಚ್ಚವಾಗುವುದೆಂದು ಲೆಕ್ಕಹಾಕಲಾಗಿದೆ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತ ಜ್ಞಾಪನ ಪತ್ರ**

| | |
|---|---|
| ಖಂಡ 7: | (1) ವಿಶೇಷ ನ್ಯಾಯಾಲಯವನ್ನು ಸ್ಥಾಪಿಸುವುದಕ್ಕೆ ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. (2) ವಿಶೇಷ ನ್ಯಾಯಾಲಯದ ಹೆಚ್ಚುವರಿ ಪೀಠವನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 8: | ತಹಸೀಲ್ದಾರ್ ದರ್ಜೆಗೆ ಕಡಿಮೆಯಲ್ಲದ ಒಬ್ಬ ಸರ್ಕಾರಿ ಅಧಿಕಾರಿಗೆ, ಆಡಳಿತ ಜವಾಬ್ದಾರಿಯುಳ್ಳ ಹಾಗೂ ಈ ಅಧಿನಿಯಮದ ಉಪಬಂಧಗಳನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವ, ಈ ಅಧಿನಿಯಮದ ಉಪಬಂಧಗಳನ್ನು ಉಲ್ಲಂಘಿಸುವ ವ್ಯಕ್ತಿಗಳ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಮತ್ತು ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಪ್ರದೇಶಗಳ ಸಂಬಂಧದಲ್ಲಿ ಅಂಥ ಅಧಿಕಾರಗಳನ್ನು ಚಲಾಯಿಸುವ ಹಾಗೂ ಅಂಥ ಪ್ರಕಾರ್ಯಗಳನ್ನು ನೆರವೇರಿಸುವ ಅಧಿಕಾರಿಯೆಂದು ಪ್ರಾಧಿಕಾರ ನೀಡಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ. |
| ಖಂಡ 9: | ಈ ಅಧಿನಿಯಮದ ಅಡಿಯಲ್ಲಿ ಮೊಕದ್ದಮೆಯನ್ನು ಸಂಜ್ಞಾನಕ್ಕೆ ತೆಗೆದುಕೊಂಡಿರುವ ಅಂಶವನ್ನು ನಿರ್ದಿಷ್ಟವಾಗಿ ತಿಳಿಸಲು ವಿಶೇಷ ನ್ಯಾಯಾಲಯಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 13: | ವಿಶೇಷ ನ್ಯಾಯಾಲಯವನ್ನು ರಚಿಸದಿರುವ ಕಡೆಯಲ್ಲಿ ಈ ಅಧಿನಿಯಮದ ಅಡಿಯಲ್ಲಿ ದಂಡನೀಯವಾದ ಎಲ್ಲ ಅಪರಾಧಗಳನ್ನು ಸಂಜ್ಞಾನಕ್ಕೆ ತೆಗೆದುಕೊಳ್ಳಲು ಪ್ರಥಮ ದರ್ಜೆ ಮ್ಯಾಜಿಸ್ಟ್ರೇಟರಿಗೆ ಅಧಿಕಾರ ನೀಡುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 18: | ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿಯಮಗಳನ್ನು ಪೂರ್ವ ಪ್ರಕಟಣೆ ಮಾಡಿ ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 19: | ಮೊಕದ್ದಮೆಗಳನ್ನು ನಡೆಸುವಾಗ ಅನುಸರಿಸಬೇಕಾದ ಪ್ರಕ್ರಿಯೆಯನ್ನು ಮತ್ತು ತೀರ್ಮಾನಗಳನ್ನು ತೆಗೆದುಕೊಳ್ಳುವ ರೀತಿಯನ್ನು ನಿಯಂತ್ರಿಸುವ ಸಂಬಂಧದಲ್ಲಿ ಈ ಅಧಿನಿಯಮದ ಉಪಬಂಧಗಳಿಗೆ ಅಥವಾ ಅದರಡಿಯಲ್ಲಿ ರಚಿಸಲಾದ ನಿಯಮಗಳಿಗೆ ಅಸಂಗತವಾಗದಂತೆ, ಸರ್ಕಾರದ ಸಹಮತಿಯೊಡನೆ, ವಿನಿಯಮಗಳನ್ನು ರಚಿಸಲು ವಿಶೇಷ ನ್ಯಾಯಾಲಯಕ್ಕೆ ಅಧಿಕಾರ ನಿಡುತ್ತದೆ.<br>ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ಸಾಮಾನ್ಯ ಸ್ವರೂಪದ್ದಾಗಿದೆ. |

**ಡಿ.ವಿ. ಸದಾನಂದ ಗೌಡ**
ಮುಖ್ಯಮಂತ್ರಿಗಳು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

# KARNATAKA LEGISLATIVE ASSEMBLY

## THIRTEENTH LEGISLATIVE ASSEMBLY

## ELEVENTH SESSION

# THE KARNATAKA LAND GRABBING PROHIBITION BILL, 2011

**(L.A. Bill No. 43 of 2011)**

A Bill to provide for measures to curb organized attempts to grab lands whether belonging to the Government, wakf or the Hindu Religious Institutions and Charitable Endowments, local authorities or other statutory or non-statutory bodies owned or controlled or managed by the Government.

And whereas such land grabbers are forming bogus cooperative housing societies or setting up fictitious claims and indulging in large scale, unprecedented and fraudulent sale of such lands through unscrupulous real estate dealers

or otherwise in favour of certain sections of the people resulting in large accumulation of unaccounted wealth and quick money to land grabbers and thereby adversely affecting public order;

And whereas, having regard to the resources and influence of the persons by whom, the large scale, on which and the manner in which, the unlawful activity of land grabbing was, has been, is being organised and carried on in violation of law, as land grabbers in the State of Karnataka, it is necessary and expedient to curb immediately such unlawful activity of land grabbing.

Be it enacted by the Karnataka State Legislature in the sixty second year of the Republic India as follows:-

**1. Short title, application and commencement.-** (1) This Act may be called the Karnataka Land Grabbing Prohibition Act, 2011.

(2) It applies to land belonging to the Government**,** Wakf or the Hindu Religious Institutions and Charitable Endowments, local authority or any statutory or non-statutory body owned, controlled or managed by the Government in the State of Karnataka.

(3) It shall come into force at once.

**2. Definitions.-** In this Act**,** unless the context otherwise requires,-

(a) "Charitable Endowment" means Charitable Endowment as defined in sub-section (5) of section 2 of the Hindu Religious Institutions and Charitable Endowments Act, 1997 (Karnataka Act 33 of 2001);

(b) "Government" means the State Government;

(c) "Hindu Religious Institution" means the Hindu Religious Institution as defined in sub-section (17) of section 2 of the Hindu Religious Institutions and Charitable Endowments Act, 1997 (Karnataka Act 33 of 2001);

(d) "Land" includes,-

(i) land belonging to the Government, Wakf or the Hindu Religious Institutions and Charitable Endowments, a local authority, a statutory or non statutory body owned, controlled or managed by the Government;

(ii) rights in or over land, benefits to arise out of land, and buildings, structures and other things attached to the earth or permanently fastened to anything attached to the earth;

(e)"land grabber" means a person or a group of persons who commits land grabbing and includes any person who gives financial aid to any person for taking illegal possession of lands or for construction of unauthorised structures thereon, or who collects or attempts to collect from any occupiers of such lands rent, compensation and other charges by criminal intimidation, or who abets the doing of any of the above mentioned acts; and also includes the successors in interest;

(f) "land grabbing" means every activity of grabbing of any land, without any lawful entitlement and with a view to illegally taking possession of such land, or enter into or create illegal tenancies or lease and licences agreements construct unauthorised structures thereon for sale or hire, or give such lands to any person on rental or lease and license basis for construction, or use and occupation, of unauthorised structures; and the term "to grab land" shall be construed accordingly;

(g) "local authority" includes the Municipal Corporation, a Municipal Council, Zilla Panchayat, Taluk Panchayat, Gram Panchayat, Town Panchayat, Industrial Township, Improvement Board, Urban Development Authority and Planning Authority or any Local Self Government body or institution by whatever name called constituted under any law for the time being in force;

(h) "notification" means a notification published in the Karnataka Gazette; and the word "notified" shall be construed accordingly;

(i) "person" includes a group or body of persons, any company or an association, whether incorporated or not;

(j) "prescribed" means prescribed by rules made under this Act;

(k) 'Special Court' means a Special Court constituted under section 7;

(l) "unauthorised structures" means any structure constructed, without express permission of the concerned competent authority under relevant law for the time being in force;

(m) "Wakf" means wakf as defined in clause (r) of section 3 of the Wakf Act, 1995 (Central Act 43 of 1995).

**3. Land grabbing to be unlawful.-** Land grabbing in any form is hereby prohibited and declared unlawful and any activity connected with or arising out of land grabbing shall be an offence punishable under this Act.

**4. Prohibition of land grabbing.-** (1) No person shall commit or cause to be committed land grabbing, by himself or through any other person.

(2) Any person who, on or after the commencement of this Act, continue to be in occupation, otherwise than as a lawful tenant, of a grabbed land belonging to the Government, Wakf, Hindu Religious Institution and Charitable Endowments, local authority, statutory or non-statutory body owned, controlled or managed by the State Government shall be guilty of an offence under this Act.

(3) Whoever contravenes the provisions of sub-section (1) or sub-section (2) shall on conviction, be punished with imprisonment for a term which shall not be less than one year but which may extend to three years, and with fine which may extend to twenty five thousand rupees.

**5. Penalty for other offences in connection with land grabbing.-** Whoever, with a view to grabbing land in contravention of the provisions of this Act or in connection with any such land grabbing,-

(a) sells or allots, or offers or advertises for sale or allotment, or has in his possession for the purpose of sale or allotment any land grabbed;

(b) instigates or incites any person to commit land grabbing;

(c) uses any land grabbed or causes or permits knowingly to be used for purposes, connected with sale or allotment; or

(d) enters into an agreement for construction of any structure or buildings on such land;

(e) causes or procures or attempts to procure any person to do any of above mentioned acts;

shall, on conviction, be punished with imprisonment for a term which shall not be less than one year but which may extend to three years and with fine which may extend to twenty five thousand rupees.

**6. Offences by companies.-** (1) Where an offence against any of the provisions of this Act or any rule made thereunder has been committed by a company, every person who at the time of the offence was committed, was in charge of and was responsible to the company for the conduct of business of the company, as well as the company, shall be deemed to be guilty of the offence and shall be liable to be proceeded against and punished accordingly:

Provided that nothing contained in this sub-section shall render any such person liable to any punishment if he proves that the offence was committed without his knowledge or that he has exercised all due diligence to prevent the commission of the such offence.

(2) Notwithstanding anything contained in sub-section (1), where any such offence has been committed by a company and it is proved that the offence has been committed with the consent or connivance of or is attributable to any

neglect on the part of any director, manager, secretary or other officer of the company, such director, manager, secretary or other officer shall be deemed to be guilty of that offence and shall be liable to be proceeded against and punished accordingly.

**Explanation.-** For the purposes of this section:-

(a) "company, trust, firm, society" means respectively a company defined under the Companies Act, 1956 (Act No.1 of 1956), trust defined under the Indian Trust Act, 1882 (Act No.2 of 1882), firm defined in the Indian Partnership Act, 1932 (Act No.9 of 1932), Society defined in the Karnataka Societies Registration Act, 1960 (Karnataka Act 17 of 1960) or other association of individuals; and

(b) "director" in relation to:-

(i) a company means the director as defined in sub-section (13) of section 2 of the Companies Act, 1956 and partner means a partner in the firm;

(ii) a society, a trust or other association of individuals, means the person who is entrusted under the relevant provisions of the Act or rules of the society, trust or other association with management of the affairs of the society, trust or other association, as the case may be.

**7. Constitution of Special Courts.-** (1) The Government may, for the purpose of providing speedy enquiry into any alleged act of land grabbing, and trial of cases in respect of the ownership and title to, or lawful possession of, the land grabbed and those offences specified in Chapter XIV-A of the Karnataka Land Revenue Act, 1964, by notification, constitute a Special Court.

(2) A Special Court shall initially consist of a Chairman and four other members, to be appointed by the Government.

(3) The Chairman shall be a person who is or was a judge of a High Court and of the other four members, two shall be persons who are or were District Judges (hereinafter referred to as Judicial Members) and the other two members shall be persons who hold or have held a post not below the rank of a Deputy Commissioner of the District (hereinafter referred to as Revenue Members):

Provided that the appointment of a person who was a Judge of a High Court as the Chairman of the Special Court shall be made after consultation with the Chief Justice of the High Court.

(4) The Government, if, it is of the opinion that Additional Bench of the Special Court is necessary for trial of such cases, may likewise constitute Additional Bench of Special Court, by notification, in respect of such area, as may be specified therein.

(5) Such Additional Bench shall consist of one Judicial member and one Revenue member with a qualification specified in sub-section (3).

(6) The Government from time to time likewise, by notification, reconstitute the Special Court constituted under sub-section (1).

(7) The Chairman or other member shall hold office as such for a term of three years from the date on which he enters upon his office, or until the Special Court is reconstituted whichever is later.

(8) (a) Subject to the other provisions of this Act, the jurisdiction, powers and authority of the Special Court may be exercised by benches thereof one comprising of the Chairman, a judicial member and a Revenue member and the other comprising of a Judicial Member and a Revenue member.

(b) Where the bench comprises of the Chairman, he shall be the Presiding Officer of such a bench and where the bench consists of two members, the Judicial Member shall be the Presiding Officer.

(c) It shall be competent for the Chairman either suo-moto or on a reference made to him to withdraw any case pending before the bench comprising of two members and dispose of the same or to transfer any case from one bench to another bench.

(d) Where it is reasonably apprehended that the trial of Civil liability of a person accused of an offence under this Act, is likely to take considerable time, it shall be competent for the Chairman to entrust the trial of the criminal liability of such offender to another bench in the interest of speedy disposal of the case.

(e) Where a case under this Act is heard by a bench consisting of two members and the members thereof are divided in opinion, the case with their opinions shall be laid before another judicial member or the Chairman and that member or Chairman, as the case may be after such hearing as he thinks fit, shall deliver his opinion and the decision or order shall follow that opinion.

(9) The quorum to constitute a meeting of any bench of the Special Court shall be two.

(10) No act or proceeding of the Special Court shall be deemed to be invalid by reason only of the existence of any vacancy among its members or any defect in the constitution or re-constitution thereof.

**8. Authorization of officers.-** The Government, may, by notification, authorize an officer of the Government, not below the rank of Tahsildar, to be the officer responsible for administration and effecting implementation of the provisions of this Act, initiate legal action against the persons contravening the provisions of this Act and exercise such powers and performs such functions, in respect of such area, as may be specified in the notification.

**9. Procedure and powers of the Special Courts.-** (1) The Special Court may, either suo-moto or on application made by any person, officer or authority take cognizance of and try every case arising out of any alleged act of land grabbing or with respect to the ownership and title to, or lawful possession of, the land grabbed or offences specified in Chapter XIV-A of the Karnataka Land Revenue Act, 1964 whether before or after the commencement of this Act, and pass such orders including orders by way of interim directions as it deems fit.

(2) The Special Court shall for the purpose of taking cognizance of the case, consider the location, or extent or value of the land alleged to have been grabbed or of the substantial nature of the evil involved or in the interest of justice required or any other relevant matter.

(3) In respect of an alleged act of land grabbing or the determination of questions of title and ownership to, or lawful possession of any land grabbed under this Act and offences specified in Chapter XIV-A of the Karnataka Land Revenue Act, 1964, shall be tried only in a Special Court constituted for the area in which the land grabbed is situated; and the decision of the Special Court shall be final:

Provided that if, in the opinion of the Special Court, any application filed before it, is prima facie frivolous or vexatious, it shall reject the same without any further enquiry.

(4) The Special Court shall determine the order in which the civil and criminal liability against a land grabber be initiated. It shall be within the discretion of the Special Court whether or not to deliver its decision or order until both civil and criminal proceedings are completed. The evidence admitted during the criminal proceeding may be made use of while trying the civil liability. But additional evidence, if any adduced in the civil proceedings shall not be considered by the Special Court while determining the criminal liability. Any person accused of land grabbing or the abetment thereof before the Special Court shall be a competent witness for the defence and may give evidence on oath in disproof of the charge made against him or any person charged together with him in the criminal proceeding:

Provided that he shall not be called as a witness except on his own request in writing or his failure to give evidence shall be made the subject of any comment by any of the parties or the special court or give rise to any presumption against himself or any person charged together with him at the same proceeding.

(5) (a) The Special Court shall, while deciding the civil liability of a person shall follow its own procedure which is not inconsistent with the provisions of the Code of Civil Procedure, 1908.

(b) Every offence punishable under this Act shall be tried summarily.

(c) When a person is convicted of an offence of land grabbing attended by criminal force or show of force or by Criminal intimidation, and it appears to the Special Court that, by such force or show of force or intimidation, the land has been grabbed, the Special Court may if it thinks fit, order that possession of the same be restored after evicting by force, if necessary.

(6) Every case under sub-section (1) shall be disposed of finally by the Special Court, as far as possible, within a period of six months from the date of institution of the case before it.

(7) Every finding of the Special Court with regard to any alleged act of land grabbing shall be conclusive proof of the fact of land grabbing and of the persons who committed such land grabbing, and every judgment of the Special Court with regard to the determination of title and ownership to, or lawful possession of; any land grabbed shall be binding on all persons having interest in such land:

Provided that the Special Court shall, by notification specify the fact of taking cognizance of the case under this Act. Such notification shall state that any objection which may be received by the Special Court from any person including the custodian of evacuee property within the period specified therein shall be considered by it:

Provided further that where the custodian of evacuee property objects to the Special Court taking cognizance of the case, the Special Court shall not proceed further with the case in regard to such property:

Provided also that the Special Court shall cause a notice of taking cognizance of the case under the Act, served on any person known or believed to be interested in the land, after a summary enquiry to satisfy itself about the persons likely to be interested in the land.

(8) It shall be lawful for the Special Court to pass such order as it may deem fit to advance the cause of justice. It may award compensation in terms of money for wrongful possession of the land grabbed which shall not be less than the amount equivalent to the market value of the land grabbed as on the date of the order and profits accrued from the land payable by the land grabber to the owner of the grabbed land and may direct re-delivery of the grabbed land to its rightful owner. The amount of compensation and profits, so awarded and costs of re-delivery, if any, shall be recovered as an arrear of land revenue in case the Government is the owner, or as a decree of a Civil Court, in any case to be executed by the Special Court:

Provided that the Special Court shall, before passing an order under this sub-section, give to the land grabber an opportunity of making his representation or of adducing evidence, if any, in this regard, and consider every such representation and evidence.

**10. Special Court to have the powers of the Civil Court and the Court of Session.-** Save as expressly provided in this Act, the provisions of the Code of Civil Procedure, 1908 and the Code of Criminal Procedure, 1973, in so far as they are not inconsistent with the provisions of this Act, shall apply to the proceedings before the Special Court and for the purposes of the provisions of the said enactments, Special Court shall be deemed to be a Civil Court, or as the case may be, a Court of Sessions and shall have all the powers of a Civil Court and a Court of Sessions and person conducting a prosecution before the Special Court shall be deemed to be a Public Prosecutor.

**11. Burden of proof.-** Where in any proceedings under this Act prima facie proved to be the land owned by the Government, the Special Court shall presume that the person who is alleged to have grabbed the land is a land-grabber and the burden of proving that the land has not been grabbed by him shall be of such person.

**12. Staff of the Special Court.-** (1) The chairman of the Special Court may appoint officers and other employees required to assist the Special Court in the discharge of its functions under this Act.

(2) The categories of officers and employees who may be appointed under sub-section (1), their salaries, allowances, method of recruitment and other conditions of service and the administrative powers of the Chairman of the Special Court shall be such as may be prescribed, after consultation with the Chairman.

**13. Power to try offences.-** All offences punishable under this Act shall be cognizable. Every offence punishable under this Act shall be tried by a magistrate of the first class specially empowered by the Government in this behalf by notification in the official gazette wherever Special Court is not constituted.

**14. Persons acting under the Act to be public servants**.- Every person acting under the provisions of this Act shall be deemed to be a public servant within the meaning of section 21 of the Indian Penal Code.

**15. Protection of persons acting in good faith**.- No suit, prosecution or other legal proceeding shall lie against any officer or employee of the Special Court or any officer of the Government for anything done in good faith or intended to be done under this Act or the rules made thereunder.

**16. Act to override other laws**.- The provisions of this Act shall have effect notwithstanding anything inconsistent therewith contained in any other law for the time being in force or custom, usage or agreement or decree or order of a court or any other tribunal or authority.

**17. Review.-** The Special Court may in order to prevent the miscarriage of justice review its judgment or order passed under section 9 but no such review shall be entertained except on the ground that it was passed under a mistake of fact, ignorance of any material fact or an error apparent on the face of the record:

Provided that it shall be lawful for the Special Court to admit or reject review petitions in circulation without hearing the petitioner:

Provided further that the Special Court shall not allow any review petition and set aside its previous order or judgment without hearing the parties affected.

**18. Power to make rules**.- (1) The Government may, by notification, after previous publication make rules for carrying out the purposes of this Act.

(2) Every rule made under this section shall, immediately after it is made, be laid before each House of the State Legislature if it is in session and if it is not in session in the session immediately following, for a total period of fourteen days which may be comprised in one session, or in two successive sessions and if before the expiration of the session in which it is so laid or the session immediately following both Houses agree in making any modification in the rule or in the annulment of the rule, the rule shall, from the date on which the modification or annulment is notified, have effect only in such modified form or shall stand annulled, as the case may be; so however, that any such modification or annulment shall be without prejudice to the validity of anything previously done under that rule.

**19. Power to make regulations.-** (1) The Special Court may, by notification, with the concurrence of the Government, make regulations not inconsistent with the provisions of this Act or the rules made thereunder relating to the procedure to be followed for the conduct of the cases and for regulating the manner of taking decisions.

(2) The Special Court may cause a public notice of the substance of such regulations for the information of the general public.

(3) Every regulation made under this section shall, immediately after it is made, be laid before such House of the Legislature of the Sate if it is in session, and if it is not in session in the session immediately following for a total period of fourteen days which may be comprised in one session or in two successive sessions and if before the expiration of the session in which it is so laid or the session immediately following the State Legislature agrees in making any modifications

in the regulation or in the annulment of the regulation, the regulation shall, from the date on which the modification or annulment is notified, have effect only in such modified form or shall stand annulled, as the case may be; so however, that any such modification or annulments shall be without prejudice to the validity of anything previously done under that regulation.

**20. Transfer of pending cases.-** Any case, pending before any court or other authority immediately before the constitution of a Special Court, as would have been within the jurisdiction of such Special Court, shall stand transferred to the Special Court as if the cause of action on which such suit or proceeding is based had arisen after the constitution of the Special Court.

**21. Prohibition of alienation of lands grabbed.-** Any transaction relating to an alienation of a land grabbed or any part thereof by way of sale, lease, gift, exchange, settlement, surrender, usufructuary mortgage or otherwise, or any partition effected or a trust created in respect of such land, which has taken place whether before or after the commencement of this Act shall, except to the extent ordered by the Special Court, or be null and void.

## STATEMENT OF OBJECTS AND REASONS

The Karnataka Land Grabbing (Prohibition) Bill 2007 with the following Statement of Objects and Reasons was passed by both the houses of the Karnataka State Legislature namely;-

"It has come to the notice of the Government that there are organised attempts on the part of certain lawless persons operating individually and in groups to grab either by force, or by deceit or otherwise lands belonging to the Government, a local authority, a religious or charitable institution or endowment, including a wakf. The land grabbers are forming bogus co-operative housing societies or setting up fictitious claims and indulging in large scale and unprecedented and fraudulent sales of land through unscrupulous real estate dealers or otherwise in favour of certain sections of people, resulting in large scale accumulation of the unaccounted wealth. As public order is adversely affected by such unlawful activities of land grabbers in the State, particularly in respect of urban and urbanisable lands, the State Government has felt that it is necessary to curb such unlawful activities immediately by enacting a special law in this regard.

Hence, the State Government of Karnataka with a view to prohibit the activities of land grabbing and to provide for matters connected therewith has proposed to bring the Karnataka Land Grabbing (Prohibition) Act into force. Apart from declaring land grabbing as unlawful, the State Government desires to prohibit land grabbing. Therefore, it is proposed to provide for penalty for offences in connection with land grabbing to effectively implement this Act and for the purpose of providing speedy enquiry into an alleged act of land grabbing and trial of cases in respect of the ownership and title to, or lawful possession of the land grabbed by Notification constitute a Special Court. It is felt that the State Government will be able to curb the illegal land grabbing by enforcing the proposed legislation."

Accordingly, the Karnataka Bhu Kabalike (Nishedha) Vidheyaka, 2007 as passed by both the houses the State Legislature was sent to Government of India to obtain the assent of the President.

The Government of India in its letter No.17/20/2007- Judl and PP dated 16/20.8. 2007, on the suggestion made by the Ministry of Corporate Affairs had suggested modification to the Karnataka Bhu kabalike (Nisheda) Vidyeyaka 2007. Accordingly clause 6 of the Bill has been modified by incorporating Explanation for the word Company and Director.

The Government of India vide letter No. 17/20/2007 – Judl & PP dated:18-06-2010, had suggested modifications to sub-clause (2) of clause 2 of the Bill on the suggestions made by the Ministry of Minority Affairs and also to the sub-clause (2) of clause 1 of the Bill on the suggestion made by the Department of Legal Affairs. Accordingly the State Government vide its letter No. DPAL 22 SHASHANA 2007, dated 7.9.2010 Communicated its acceptance to make the said modification by amending the Bill, by extending the provisions to the lands belonging to the Wakfs, Hindu Religious

Institutions and Charitable Endowments and requested the Government of India to obtain the assent of the President to the said Bill and also to obtain previous instructions to the modifications to be issued in the form of an Ordinance.

The Government of India vide its letter No. 17/20/2007 – Judl & PP dated:03-03-2010/2011 has directed the State Government to consider withdrawing the present Bill (LA Bill No.27 of 2007) and submit a modified Bill instead of concurrent promulgation of any amendment Ordinance.

Hence the Bill.

**FINANCIAL MEMORANDUM**

A sum of Rs.1,69,07,452=00 is calculated to be the approximate expenditure to the State exchequer from the Proposed Legislative measure.

**MEMORANDUM REGARDING DELEGATED LEGISLATION**

| | | |
|---|---|---|
| Clause 7: | (1) | Empowers the State Government to constitute a Special Court. |
| | (2) | Empowers the State Government to constitute an Additional Bench of Special Court. |
| Clause 8: | | Empowers the State Government to an officer of the Government, not below the rank of Tahsildar, to be officer responsible for administration and effecting implementation of the provisions of this Act, initiate legal action against the persons contravening the provisions of this Act and exercise such powers and performs such functions, in respect of such area, as may be specified. |
| Clause 9: | | Empowers the Special Court to specify the fact of taking cognizance of the case under this Act. |
| Clause 13: | | Empowers the State Government to empower a magistrate of the first class to take cognizance of all offences punishable under this Act wherever Special Court is not constituted. |
| Clause 18: | | Empowers to the State Government to make rules for carrying out the purposes of this Act after previous publication. |
| Clause 19: | | Empowers the Special Court to make regulations not inconsistent with the provisions of this Act or the rules made there under relating to the procedure to be followed for the conduct of the cases and for regulating the manner of taking decisions, with the concurrence of the Government. |

The Proposed delegation of legislative power is normal in character.

**D.V. SADANANDA GOWDA**
Chief Minister

**P. OMPRAKASHA**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಶುಕ್ರವಾರ, ಡಿಸೆಂಬರ್ ೧೬, ೨೦೧೧ (ಮಾರ್ಗಶಿರ ೨೫, ಶಕ ವರ್ಷ ೧೯೩೩) | ನಂ. ೯೯೮ |
|---|---|---|


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/47/Bill/2011, Bangalore, Dated: 16.12.2011**

The following Bill was introduced in Legislative Assembly on 16.12.2011.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹನ್ನೊಂದನೇ ಅಧಿವೇಶನ**

## ಕಿತ್ತೂರು ಅಭಿವೃದ್ಧಿ ಪ್ರಾಧಿಕಾರ ವಿಧೇಯಕ, 2011

**(2011ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 47)**

ಬೆಳಗಾವಿ ಜಿಲ್ಲೆಯ ಕಿತ್ತೂರು ಗ್ರಾಮದಲ್ಲಿ ಮತ್ತು ಅದರ ಸುತ್ತಮುತ್ತ ಇರುವ ಪರಂಪರೆಯ ತಾಣಗಳ ಅಭಿವೃದ್ಧಿ ಮತ್ತು ನಿರ್ವಹಣೆಗಾಗಿ ಒಂದು ಪ್ರಾಧಿಕಾರವನ್ನು ಸ್ಥಾಪಿಸುವುದಕ್ಕಾಗಿ ಉಪಬಂಧ ಕಲ್ಪಿಸಲು ಒಂದು ವಿಧೇಯಕ.

ಬೆಳಗಾವಿ ಜಿಲ್ಲೆಯ, ಬೈಲಹೊಂಗಲ ತಾಲ್ಲೂಕಿನ ಕಿತ್ತೂರು ಗ್ರಾಮದಲ್ಲಿ ಮತ್ತು ಅದರ ಸುತ್ತಮುತ್ತ ಇರುವ ಪರಂಪರೆಯ ತಾಣಗಳನ್ನು ಅಂತರರಾಷ್ಟ್ರೀಯ ಯಾತ್ರಾ ಸ್ಥಳವನ್ನಾಗಿ, ಸಾಂಸ್ಕೃತಿಕ ಮತ್ತು ಪ್ರವಾಸ ಕೇಂದ್ರವನ್ನಾಗಿ ಅಭಿವೃದ್ಧಿಪಡಿಸಲು ಮತ್ತು ಅದನ್ನು ನಿರ್ವಹಿಸಲು ಒಂದು ಪ್ರಾಧಿಕಾರವನ್ನು ಸ್ಥಾಪಿಸಲು ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು.

**ಅಧ್ಯಾಯ – I**

**ಪ್ರಾರಂಭಿಕ**

**1. ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕಿತ್ತೂರು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 2011 ಎಂದು ಕರೆಯತಕ್ಕದ್ದು.

(2) ಇದು, 2ನೇ ಪ್ರಕರಣದ (ಸಿ)ಖಂಡದಲ್ಲಿ ಪರಿಭಾಷಿಸಿದಂತೆ ಕಿತ್ತೂರು ಗ್ರಾಮದ ಪ್ರದೇಶಕ್ಕೆ ವ್ಯಾಪ್ತವಾಗತಕ್ಕದ್ದು.

(3) ಇದು, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) **"ಸೌಕರ್ಯ"** ಎಂಬುದರಲ್ಲಿ ರಸ್ತೆಗಳು, ಬೀದಿಗಳು, ಸುರಂಗ ಮಾರ್ಗಗಳು, ದೀಪದ ವ್ಯವಸ್ಥೆ, ಚರಂಡಿ ವ್ಯವಸ್ಥೆ, ನೈರ್ಮಲೀಕರಣ, ವಿದ್ಯುಚ್ಛಕ್ತಿ ಮತ್ತು ನೀರು ಸರಬರಾಜು ಅಥವಾ ಇತರ ಅನುಕೂಲತೆಗಳು, ಲೋಕೋಪಯೋಗಿ ಕಾಮಗಾರಿಗಳು, ಮಾರುಕಟ್ಟೆ ಸ್ಥಳಗಳು, ಆಸ್ಪತ್ರೆಗಳು, ಚಿಕಿತ್ಸಾಲಯಗಳು, ಗ್ರಂಥಾಲಯಗಳು, ಮನರಂಜನಾ ಕೇಂದ್ರಗಳು, ಪ್ರಾಧಿಕಾರವು ಅಧಿಕೃತಗೊಳಿಸಿದ ಯಾವುದೇ ಸಾರ್ವಜನಿಕ ಉಪಯುಕ್ತ ಸೇವೆಯ ಸೇವಾ ಕೇಂದ್ರಗಳು ಅಥವಾ ಇತರ ಸೌಲಭ್ಯ; ಮತ್ತು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಇತರ ಸೌಕರ್ಯಗಳನ್ನು ಒಳಗೊಳ್ಳುತ್ತದೆ;

(ಬಿ) **"ಪ್ರಾಧಿಕಾರ"** ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚಿಸಿದ ಕಿತ್ತೂರು ಅಭಿವೃದ್ಧಿ ಪ್ರಾಧಿಕಾರ;

(ಸಿ) **"ಕಿತ್ತೂರು"** ಎಂದರೆ, ಕಿತ್ತೂರು ಗ್ರಾಮದ ಹಾಗೂ ಕಿತ್ತೂರು ಗ್ರಾಮಪಂಚಾಯಿತಿಯ ಮಿತಿಗಳು ಮತ್ತು ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲ್ಲೂಕಿನಲ್ಲಿರುವ ಕಿತ್ತೂರು ಗ್ರಾಮವ್ಯಾಪ್ತಿಯ ಪ್ರದೇಶ ಮತ್ತು ಕಿತ್ತೂರಿನಲ್ಲಿರುವ ಪಾರಂಪರಿಕ ತಾಣಗಳ ಅಭಿವೃದ್ಧಿಗಾಗಿ ರಾಜ್ಯ ಸರ್ಕಾರವು ಕಾಲಕಾಲಕ್ಕೆ ಆರ್ಜಿಸಿದ ಭೂಮಿ ಮತ್ತು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಘೋಷಿಸಲಾದ ಅಂಥ ಇತರ ಪ್ರದೇಶ ಮತ್ತು ಇವುಗಳೆಲ್ಲವನ್ನೂ ಒಳಗೊಳ್ಳುತ್ತದೆ;

(ಡಿ) "ಅಧ್ಯಕ್ಷ" ಎಂದರೆ, ಪ್ರಾಧಿಕಾರದ ಅಧ್ಯಕ್ಷ;

(ಇ) "ಆಯುಕ್ತ" ಎಂದರೆ, 10ನೇ ಪ್ರಕರಣದ ಅಡಿಯಲ್ಲಿ ನೇಮಕ ಮಾಡಿದ ಪ್ರಾಧಿಕಾರದ ಆಯುಕ್ತ;

(ಎಫ್) "ನಿಧಿ" ಎಂದರೆ, ಪ್ರಾಧಿಕಾರದ ನಿಧಿ;

(ಜಿ) "ಪರಂಪರೆಯ ತಾಣ" ಎಂದರೆ, ಪ್ರಾಚೀನ ಸ್ಮಾರಕಗಳು ಮತ್ತು ಪುರಾತತ್ವ ಸ್ಥಳಗಳು ಹಾಗೂ ಅವಶೇಷಗಳ ಅಧಿನಿಯಮ, 1958ರ (1958ರ ಕೇಂದ್ರ ಅಧಿನಿಯಮ ಸಂಖ್ಯೆ 24) ಅಡಿಯಲ್ಲಿ ಸಂರಕ್ಷಿತ ಪ್ರದೇಶವೆಂದು ಉಲ್ಲೇಖಿಸಲಾದ ಪ್ರದೇಶವನ್ನು ಹೊರತುಪಡಿಸಿ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ತಾಣಗಳನ್ನು ಒಳಗೊಳ್ಳುವ ಸಂಪೂರ್ಣ ಪ್ರದೇಶವಾಗಿದೆ;

(ಹೆಚ್) "ಸದಸ್ಯ" ಎಂದರೆ, ಪ್ರಾಧಿಕಾರದ ಸದಸ್ಯ;

(ಐ) "ವಿನಿಯಮಗಳು" ಎಂದರೆ, 43ನೇ ಪ್ರಕರಣದ ಮೇರೆಗೆ ರಚಿಸಿದ ಪ್ರಾಧಿಕಾರದ ವಿನಿಯಮಗಳು;

(ಜೆ) "ಅನುಸೂಚಿ" ಎಂದರೆ, ಈ ಅಧಿನಿಯಮಕ್ಕೆ ಲಗತ್ತಿಸಿದ ಅನುಸೂಚಿ.

## ಅಧ್ಯಾಯ – II

## ಪ್ರಾಧಿಕಾರಗಳು ಮತ್ತು ಅದರ ಉದ್ಯೋಗಿಗಳು

**3. ಕಿತ್ತೂರು ಅಭಿವೃದ್ಧಿ ಪ್ರಾಧಿಕಾರ.**- (1) ಈ ಅಧಿನಿಯಮದ ಪ್ರಾರಂಭದ ತರುವಾಯ ಆದಷ್ಟು ಬೇಗನೆ, ಈ ಅಧಿನಿಯಮದ ಉದ್ದೇಶಗಳಿಗಾಗಿ ಕಿತ್ತೂರು ಅಭಿವೃದ್ಧಿ ಪ್ರಾಧಿಕಾರ ಎಂದು ಕರೆಯಲಾಗುವ ಒಂದು ಪ್ರಾಧಿಕಾರವನ್ನು ರಚಿಸತಕ್ಕದ್ದು.

(2) ಪ್ರಾಧಿಕಾರವು ಕಾಲಕಾಲಕ್ಕೆ ನಿರ್ಧರಿಸಬಹುದಾದ ಅಂಥ ಸ್ಥಳದಲ್ಲಿ ತನ್ನ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿರತಕ್ಕದ್ದು.

(3) ಪ್ರಾಧಿಕಾರವು, ಶಾಶ್ವತ ಉತ್ತರಾಧಿಕಾರ ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ, ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನು ಆರ್ಜಿಸುವ, ಧಾರಣ ಮಾಡುವ ಮತ್ತು ವಿಲೆ ಮಾಡುವ ಮತ್ತು ಕರಾರು ಮಾಡಿಕೊಳ್ಳುವ ಅಧಿಕಾರವನ್ನು ಹೊಂದಿರುವ, ಮೇಲೆ ಹೇಳಿದ ಹೆಸರಿನ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೆ ಗುರಿಯಾಗತಕ್ಕದ್ದು.

(4) ಪ್ರಾಧಿಕಾರವು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:-

(ಎ) ಮುಖ್ಯ ಮಂತ್ರಿಯವರು ಪ್ರಾಧಿಕಾರದ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು;

(ಬಿ) ಬೆಳಗಾವಿ ಜಿಲ್ಲೆಯ ಉಸ್ತುವಾರಿ ಪ್ರಭಾರದಲ್ಲಿರುವ ಸಚಿವರು ಪ್ರಾಧಿಕಾರದ ಪದನಿಮಿತ್ತ ಉಪಾಧ್ಯಕ್ಷರಾಗಿರತಕ್ಕದ್ದು;

(ಸಿ) ಕನ್ನಡ ಮತ್ತು ಸಂಸ್ಕೃತಿ ಸಚಿವರು – ಪದನಿಮಿತ್ತ ಸದಸ್ಯರು;

(ಇ) ಪ್ರವಾಸೋದ್ಯಮ ಸಚಿವರು – ಪದನಿಮಿತ್ತ ಸದಸ್ಯರು;

(ಎಫ್) ಲೋಕೋಪಯೋಗಿ ಸಚಿವರು – ಪದನಿಮಿತ್ತ ಸದಸ್ಯರು;

(ಜಿ) ಕಿತ್ತೂರು ಗ್ರಾಮವು ಭಾಗಶ: ಅಥವಾ ಸಂಪೂರ್ಣವಾಗಿ ಯಾರ ಚುನಾವಣಾ ಕ್ಷೇತ್ರದ ವ್ಯಾಪ್ತಿಯೊಳಗೆ ಬರುತ್ತದೋ ಆ ಕ್ಷೇತ್ರವನ್ನು ಪ್ರತಿನಿಧಿಸುವ ಸಂಸತ್ ಸದಸ್ಯರು ಮತ್ತು ರಾಜ್ಯ ವಿಧಾನಮಂಡಲದ ಸದಸ್ಯರು – ಸದಸ್ಯರು;

(ಹೆಚ್) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ – ಪದನಿಮಿತ್ತ ಸದಸ್ಯರು;

(ಐ) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ – ಪದನಿಮಿತ್ತ ಸದಸ್ಯರು;

(ಜೆ) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಹಣಕಾಸು ಇಲಾಖೆ – ಪದನಿಮಿತ್ತ ಸದಸ್ಯರು;

(ಕೆ) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ – ಪದನಿಮಿತ್ತ ಸದಸ್ಯರು;

(ಎಲ್) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ – ಪದನಿಮಿತ್ತ ಸದಸ್ಯರು;

(ಎಂ) ಪ್ರಾದೇಶಿಕ ಆಯುಕ್ತರು, ಬೆಳಗಾವಿ;

(ಎನ್) ಬೆಳಗಾವಿ ಜಿಲ್ಲೆಯ ಜಿಲ್ಲಾಧಿಕಾರಿಯವರು – ಪದನಿಮಿತ್ತ ಸದಸ್ಯರು;

(ಒ) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ – ಪದನಿಮಿತ್ತ ಸದಸ್ಯರು;

(ಪಿ) ಜಂಟಿ –ನಿರ್ದೇಶಕರು, ಕರ್ನಾಟಕ ಭೂ ಸೇನಾ ನಿಗಮ, ಬೆಳಗಾವಿ – ಪದನಿಮಿತ್ತ ಸದಸ್ಯರು;

(ಕ್ಯೂ) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬೆಳಗಾವಿ – ಪದನಿಮಿತ್ತ ಸದಸ್ಯರು;

(ಆರ್) ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ಬೆಳಗಾವಿ – ಪದನಿಮಿತ್ತ ಸದಸ್ಯರು

(ಎಸ್) ಅಧ್ಯಕ್ಷರು, ಗ್ರಾಮಪಂಚಾಯಿತಿ, ಕಿತ್ತೂರು – ಪದನಿಮಿತ್ತ ಸದಸ್ಯರು

(ಟಿ) ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾದ ಮೂರು ಜನರ ಸಂಖ್ಯೆಯನ್ನು ಮೀರದಂತ ಸರ್ಕಾರೇತರ ಸದಸ್ಯರು – ಸದಸ್ಯರು

(ಯು) ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾದ ಕಿತ್ತೂರಿನ ಇತಿಹಾಸ ಮತ್ತು ಪರಂಪರೆಯಲ್ಲಿ ಆಳವಾದ ಜ್ಞಾನ ಹೊಂದಿರುವ ಐದು ಜನರ ಸಂಖ್ಯೆಯನ್ನು ಮೀರದಷ್ಟು ವ್ಯಕ್ತಿಗಳು – ಸದಸ್ಯರು

(ವಿ) ಪ್ರಾಧಿಕಾರದ ಆಯುಕ್ತರು – ಸದಸ್ಯ ಕಾರ್ಯದರ್ಶಿ

**4. ಪದಾವಧಿ ಮತ್ತು ಸೇವಾ ಷರತ್ತುಗಳು.**– (1) ರಾಜ್ಯ ಸರ್ಕಾರದ ಇಚ್ಛೆಗೊಳಪಟ್ಟು, ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ಸರ್ಕಾರೇತರ ಸದಸ್ಯರು ಮೂರು ವರ್ಷಗಳ ಅವಧಿಗೆ ಪದಧಾರಣ ಮಾಡತಕ್ಕದ್ದು.

(2) ಯಾವೊಬ್ಬ ಸರ್ಕಾರೇತರ ಸದಸ್ಯನು ತನ್ನ ಸಹಿಯೊಂದಿಗೆ ರಾಜ್ಯ ಸರ್ಕಾರಕ್ಕೆ ಬರೆಯುವ ಮೂಲಕ ತನ್ನ ಪದಕ್ಕೆ ರಾಜೀನಾಮೆ ನೀಡಬಹುದು. ಆದರೆ ಅವನ ರಾಜೀನಾಮೆಯು ಅಂಗೀಕಾರವಾಗುವವರೆಗೂ ಪದದಲ್ಲಿ ಮುಂದುವರೆಯತಕ್ಕದ್ದು.

(3) ಸರ್ಕಾರೇತರ ಸದಸ್ಯರು ನಿಯಮಿಸಬಹುದಾದಂಥ ಭತ್ಯಗಳನ್ನು ಪಡೆಯತಕ್ಕದ್ದು.

**5. ಸದಸ್ಯನ ಪದಕ್ಕೆ ಅನರ್ಹತೆಗಳು.**– ಸರ್ಕಾರೇತರ ಸದಸ್ಯರು,–

(ಎ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ನೈತಿಕ ಅಧಃಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ಅಪರಾಧಿ ಎಂದು ನಿರ್ಣೀತನಾಗಿದ್ದು ಕಾರಾವಾಸದ ಶಿಕ್ಷೆಗೆ ಗುರಿಯಾಗಿದ್ದರೆ; ಅಥವಾ

(ಬಿ) ಅಸ್ವಸ್ಥ ಚಿತ್ತದವನಾಗಿದ್ದರೆ ಮತ್ತು ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿತನಾಗಿದ್ದರೆ; ಅಥವಾ

(ಸಿ) ಅವಿಮುಕ್ತ ದಿವಾಳಿಯಾಗಿದ್ದರೆ; ಅಥವಾ

(ಡಿ) ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರವು ಒಡೆತನ ಹೊಂದಿರುವ ಅಥವಾ ನಿಯಂತ್ರಣ ಹೊಂದಿರುವ ಒಂದು ಸಂಸ್ಥೆ ಅಥವಾ ನಿಗಮದ ಸೇವೆಯಿಂದ ತೆಗೆದು ಹಾಕಿದವನಾಗಿದ್ದರೆ ಅಥವಾ ವಜಾ ಮಾಡಿದವನಾಗಿದ್ದರೆ; ಅಥವಾ

(ಇ) ಪ್ರಾಧಿಕಾರದ ಆದೇಶದಿಂದ ಮಾಡಲಾದ ಯಾವುದೇ ಕಾರ್ಯದಲ್ಲಿ ಅಥವಾ ಪ್ರಾಧಿಕಾರದೊಡನೆ ಅಥವಾ ಅದರ ಅಡಿಯಲ್ಲಿ ಅಥವಾ ಅದರ ಮೂಲಕ ಅಥವಾ ಅದರ ಪರವಾದ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಸ್ವತಃ ಅವನು ಅಥವಾ ಪಾಲುದಾರನಾಗಿ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಯಾವುದೇ ಷೇರನ್ನು ಅಥವಾ ಹಿತಾಸಕ್ತಿಯನ್ನು ಹೊಂದಿದ್ದರೆ; ಅಥವಾ

(ಎಫ್) ಪ್ರಾಧಿಕಾರದ ಪರವಾಗಿ ವೇತನ ಪಡೆಯುವ ನ್ಯಾಯವಾದಿಯಾಗಿ ನಿಯೋಜಿತನಾಗಿದ್ದರೆ ಅಥವಾ ಪ್ರಾಧಿಕಾರದ ವಿರುದ್ಧವಾಗಿ ನ್ಯಾಯವಾದಿಯ ನಿಯೋಜನೆಯನ್ನು ಒಪ್ಪಿಕೊಂಡಿದ್ದರೆ,

– ಅವರು ಸದಸ್ಯರಾಗಿ ನೇಮಕ ಹೊಂದಲು ಅಥವಾ ಸದಸ್ಯರಾಗಿರಲು ಅನರ್ಹನಾರಾಗಿರತಕ್ಕದ್ದು:

ಪರಂತು, ಒಬ್ಬ ವ್ಯಕ್ತಿಯು, ಮಂಡಲಿಯ ವ್ಯವಹಾರಗಳಿಗೆ ಸಂಬಂಧಪಟ್ಟಂತೆ ಯಾವುದೇ ಜಾಹೀರಾತನ್ನು ಸೇರಿಸಲಾದ ಯಾವುದೇ ವೃತ್ತ ಪತ್ರಿಕೆಯಲ್ಲಿ ಷೇರು ಅಥವಾ ಹಿತಾಸಕ್ತಿಯನ್ನು ಹೊಂದಿದ್ದಾನೆಂಬ ಕಾರಣ ಮಾತ್ರದಿಂದಲೇ (1)ನೇ ಉಪಪ್ರಕರಣದ (ಇ) ಖಂಡದ ಅಡಿಯಲ್ಲಿ

ಅನರ್ಹನಾಗತಕ್ಕದ್ದಲ್ಲ ಅಥವಾ ಸದರಿ ಖಂಡದ ಅರ್ಥವ್ಯಾಪ್ತಿಯಲ್ಲಿ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಯಾವುದೇ ಷೇರು ಅಥವಾ ಹಿತಾಸಕ್ತಿಯನ್ನು ಹೊಂದಿದ್ದಾನೆಂದು ಭಾವಿಸತಕ್ಕದ್ದಲ್ಲ.

**6. ಸದಸ್ಯನನ್ನು ತೆಗೆದು ಹಾಕುವುದು.**- ರಾಜ್ಯ ಸರ್ಕಾರವು ಸರ್ಕಾರೇತರ ಸದಸ್ಯನನ್ನು,-

(ಎ) ಅವನು 5ನೇ ಪ್ರಕರಣದಲ್ಲಿ ಹೇಳಲಾದ ಅನರ್ಹತೆಗಳಲ್ಲಿ ಯಾವುದೇ ಅನರ್ಹತೆಗೆ ಒಳಪಟ್ಟರೆ:

ಪರಂತು, ಯಾವೊಬ್ಬ ಸದಸ್ಯನನ್ನು, ಅವನು ಆ ಪ್ರಕರಣದ (ಇ) ಖಂಡದಲ್ಲಿ ಹೇಳಲಾದ ಅನರ್ಹತೆಗೆ ಒಳಗಾಗಿದ್ದಾನೆಂಬ ಕಾರಣದ ಮೇಲೆ, ಪ್ರಸ್ತಾವದ ವಿರುದ್ಧ ತನ್ನ ಮನವಿಯನ್ನು ಸಲ್ಲಿಸಲು ಅವನಿಗೆ ಒಂದು ಅವಕಾಶವನ್ನು ಕೊಟ್ಟ ಹೊರತು, ತೆಗೆದು ಹಾಕತಕ್ಕದ್ದಲ್ಲ; ಅಥವಾ

(ಬಿ) ಅವನು ಕಾರ್ಯ ನಿರ್ವಹಿಸಲು ನಿರಾಕರಿಸಿದರೆ ಅಥವಾ ಕಾರ್ಯವನ್ನು ನಿರ್ವಹಿಸಲು ಅಸಮರ್ಥನಾದರೆ; ಅಥವಾ

(ಸಿ) ಅವನು ಗೈರು ಹಾಜರಾಗಲು ಪ್ರಾಧಿಕಾರದಿಂದ ಅನುಮತಿ ಪಡೆಯದೆ ಪ್ರಾಧಿಕಾರದ ಮೂರು ನಿರಂತರ ಸಭೆಗಳಿಗೆ ಗೈರುಹಾಜರಾದರೆ:

ಪರಂತು, ಈ ಖಂಡವು ಪದನಿಮಿತ್ತ ಸದಸ್ಯರಿಗೆ ಅನ್ವಯವಾಗತಕ್ಕದ್ದಲ್ಲ; ಅಥವಾ

(ಡಿ) ಅವನನ್ನು ಆ ಪದದಲ್ಲಿ ಮುಂದುವರಿಸಿದರೆ, ಸಾರ್ವಜನಿಕ ಹಿತಾಸಕ್ತಿಗೆ ಬಾಧಕ ಉಂಟಾಗುವಂತೆ ತನ್ನ ಸ್ಥಾನವನ್ನು ದುರುಪಯೋಗಪಡಿಸಿಕೊಳ್ಳುವನೆಂದು ರಾಜ್ಯ ಸರ್ಕಾರವು ಅಭಿಪ್ರಾಯಪಟ್ಟರೆ,

-ಅವನನ್ನು ತೆಗೆದುಹಾಕತಕ್ಕದ್ದು:

ಪರಂತು, ಯಾವೊಬ್ಬ ಸದಸ್ಯನನ್ನು ಅವನಿಗೆ ಪ್ರಸ್ತಾವದ ವಿರುದ್ಧ ತನ್ನ ಮನವಿಯನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ಕೊಟ್ಟ ಹೊರತು ಈ ಖಂಡದ ಅಡಿಯಲ್ಲಿ ತೆಗೆದು ಹಾಕತಕ್ಕದ್ದಲ್ಲ.

**7. ಮರು ನೇಮಕಾತಿಗೆ ಅರ್ಹತೆ.**- ಯಾವೊಬ್ಬ ಸದಸ್ಯನು, ಸದಸ್ಯನಾಗಿರುವುದು ಸಮಾಪ್ತಿಯಾದಾಗ, 6ನೇ ಪ್ರಕರಣದಲ್ಲಿ ಹೇಳಲಾದ ಅನರ್ಹತೆಗೊಳಗಾಗದಿರುವಲ್ಲಿ, ಸದಸ್ಯನಾಗಿ ಮರುನೇಮಕ ಹೊಂದಲು ಅರ್ಹನಾಗಿರತಕ್ಕದ್ದು.

**8. ಪ್ರಾಧಿಕಾರದ ಅಧಿಕಾರಗಳು.**- (1) ಈ ಅಧಿನಿಯಮದ ಉದ್ದೇಶಗಳು ಮತ್ತು ಉಪಬಂಧಗಳನ್ನು ಪರಿಣಾಮಗೊಳಿಸಲು ಪ್ರಾಧಿಕಾರವು ಅವಶ್ಯಕವೆಂದು ಅಭಿಪ್ರಾಯಪಡುವಂಥ ಯಾವುವೇ ಕಾರ್ಯಗಳನ್ನು ಮಾಡುವುದಕ್ಕೆ ಸಾಮಾನ್ಯವಾಗಿ ಪ್ರಾಧಿಕಾರವು ಅಧಿಕಾರ ಹೊಂದಿರತಕ್ಕದ್ದು:

ಪರಂತು, ಈ ಪ್ರಕರಣದಲ್ಲಿ ಇರುವುದು ಯಾವುದೂ, ಇತರ ಪ್ರಾಧಿಕಾರವು ನೆರವೇರಿಸಬೇಕೆಂದು ಅಧಿನಿಯಮದಲ್ಲಿ ನಿರ್ದಿಷ್ಟವಾಗಿ ಹೇಳಿದಂಥ ಯಾವುದೇ ಕಾರ್ಯವನ್ನು ನೆರವೇರಿಸಲು ಈ ಪ್ರಾಧಿಕಾರವನ್ನು ಅಧಿಕೃತಗೊಳಿಸಲಾಗಿದೆಯೆಂದು ಭಾವಿಸತಕ್ಕದ್ದಲ್ಲ.

(2) ಅಧಿನಿಯಮದ (1)ನೇ ಉಪಪ್ರಕರಣದ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ ಪ್ರಾಧಿಕಾರವು,

(ಎ) ನಿಯಮಿಸಬಹುದಾಂತಹ ನಿಯಮಗಳಿಗೆ ಒಳಪಟ್ಟು ಈ ಅಧಿನಿಯಮದ ಯಾವುದೇ ಉದ್ದೇಶವನ್ನು ನೆರವೇರಿಸಲು ಅವಶ್ಯಕ ಅಥವಾ ಯುಕ್ತವೆಂದು ತಾನು ಪರಿಗಣಿಸುವಂತಹ ಎಲ್ಲ ಕರಾರುಗಳನ್ನು ಪ್ರಾಧಿಕಾರದ ಪರವಾಗಿ ಪ್ರಾಧಿಕಾರದ ಆಯುಕ್ತರು ಮಾಡಿಕೊಳ್ಳತಕ್ಕದ್ದು:

ಪರಂತು, ಐದು ಲಕ್ಷ ರೂಪಾಯಿಗಳು ಅಥವಾ ಅದಕ್ಕೂ ಹೆಚ್ಚು ವೆಚ್ಚವನ್ನೊಳಗೊಳ್ಳುವ ಯಾವ ಕರಾರನ್ನು ರಾಜ್ಯ ಸರ್ಕಾರದ ಪೂರ್ವ ಮಂಜೂರಾತಿ ಇಲ್ಲದೇ ಮಾಡಿಕೊಳ್ಳತಕ್ಕದ್ದಲ್ಲ.

(ಬಿ) ರಾಜ್ಯ ಸರ್ಕಾರದ ಪೂರ್ವ ಮಂಜೂರಾತಿಯೊಂದಿಗೆ ಮತ್ತು ಈ ಸಂಬಂಧವಾಗಿ ನಿಯಮಿಸಬಹುದಾದಂತಹ ಷರತ್ತಿಗೊಳಪಟ್ಟು, ಈ ಅಧಿನಿಯಮದ ಉದ್ದೇಶಗಳಿಗಾಗಿ ಕಾಲಕಾಲಕ್ಕೆ ಅಗತ್ಯವಾಗುವ ಯಾವುದೇ ಮೊಬಲಗನ್ನು ಸಾಲವಾಗಿ ಪಡೆಯಲು;

(ಸಿ) ಅಧಿನಿಯಮ 39ನೇ ಪ್ರಕರಣಕ್ಕೆ ಒಳಪಟ್ಟು ಮತ್ತು ನಿಯಮಿಸಬಹುದಾದಂತಹ ನಿರ್ಬಂಧಗಳು, ಷರತ್ತುಗಳು ಮತ್ತು ಪರಿಮಿತಿಗಳಿಗೆ ಒಳಪಟ್ಟು ತನಗೆ ಸೇರಿದ ಚರ ಅಥವಾ ಸ್ಥಿರ ಸ್ವತ್ತಿನ್ನು ಗುತ್ತಿಗೆ, ಮಾರಾಟ ಅಥವಾ ಇತರ ರೀತಿಯಲ್ಲಿ ವರ್ಗಾವಣೆ ಮಾಡಲು ಮತ್ತು ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಯಾವುದೇ ಅಭಿವೃದ್ಧಿ ಯೋಜನೆಯ ಉದ್ದೇಶಕ್ಕಾಗಿ ತನ್ನಲ್ಲಿ ನಿಹಿತವಾಗಿರುವ ಅಥವಾ ತಾನು ಆರ್ಜಿಸಿದ ಯಾವುದೇ ಭೂಮಿಯನ್ನು ಮೈದಾನಗಳನ್ನು ರೂಪಿಸುವಾಗ ಅಥವಾ ಕಟ್ಟಡ ನಿರ್ಮಿಸುವ ಉದ್ದೇಶಗಳಿಗಾಗಿ ಅಥವಾ ಇನ್ನಾವುದೇ ಇತರ ರೀತಿಯಲ್ಲಿ ವಿನಿಯೋಗಿಸಲು ಅಥವಾ ಬಳಸಲು,

– ಅಧಿಕಾರ ಹೊಂದಿರತಕ್ಕದ್ದು.

**9. ಪ್ರಾಧಿಕಾರದ ಉಪ ಸಮಿತಿಗಳು.**– (1) ಪ್ರಾಧಿಕಾರವು, ಯಾವುದೇ ನಿರ್ದಿಷ್ಟ ಉದ್ದೇಶಕ್ಕಾಗಿ, ಆಯುಕ್ತನು ಅಧ್ಯಕ್ಷನಾಗಿರುವ ಮತ್ತು ಪ್ರತಿಯೊಂದು ಉಪಸಮಿತಿಗೆ ಐದು ಜನರಿಗೆ ಮೀರದಂಥ ಇತರ ಸದಸ್ಯರಿರುವ ಒಂದು ಅಥವಾ ಹೆಚ್ಚು ಉಪಸಮಿತಿಗಳನ್ನು ರಚಿಸಬಹುದು. ಉಪಸಮಿತಿಯು

ಪರ್ಯಾಲೋಚಿಸಿ ತೀರ್ಮಾನಿಸಿದ ಯಾವುದೇ ವಿಷಯವನ್ನು ಅನುಮೋದನೆ ಅಥವಾ ನಿರಾಕರಣೆಗಾಗಿ ಪ್ರಾಧಿಕಾರದ ಸಭೆಯಲ್ಲಿ ಮಂಡಿಸತಕ್ಕದ್ದು. ನಿರ್ಣಯವನ್ನು ಉಪಸಮಿತಿಗೆ ಹಿಂದಿರುಗಿಸಬಹುದು.

(2) ಉಪಸಮಿತಿಗಳು ಪ್ರಾಧಿಕಾರವು ಪ್ರತ್ಯಾಯೋಜಿಸಿದಂತಹ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂತಹ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

(3) ಪ್ರತಿಯೊಂದು ಉಪಸಮಿತಿಯು ಕನಿಷ್ಠ ಪಕ್ಷ ಮೂರು ತಿಂಗಳಿಗೆ ಒಂದು ಸಲವಾದರೂ ಸಭೆ ಸೇರತಕ್ಕದ್ದು ಮತ್ತು ವಿನಿಯಮಗಳ ಮೂಲಕ ಉಪಬಂಧ ಕಲ್ಪಿಸಬಹುದಾದಂತೆ ಅದರ ಸಭೆಯ ಕಾರ್ಯಕಲಾಪಗಳಿಗೆ ಸಂಬಂಧಿಸಿದ ಅಂತಹ ಪ್ರಕ್ರಿಯಾ ನಿಯಮಗಳನ್ನು ಪಾಲಿಸತಕ್ಕದ್ದು.

**10. ಆಯುಕ್ತನ ನೇಮಕಾತಿ.**– (1) ಸರ್ಕಾರವು, ಸರ್ಕಾರದ ಉಪ ಕಾರ್ಯದರ್ಶಿ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಅಧಿಕಾರಿಯನ್ನು ಪ್ರಾಧಿಕಾರದ ಆಯುಕ್ತನಾಗಿ ನೇಮಿಸತಕ್ಕದ್ದು;

(2) ಆಯುಕ್ತನು, ರಾಜ್ಯ ಸರ್ಕಾರವು ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ವೇತನ ಮತ್ತು ಇತರ ಭತ್ಯಗಳನ್ನು ಸ್ವೀಕರಿಸತಕ್ಕದ್ದು. ಆಯುಕ್ತನ ಸೇವಾ ಷರತ್ತುಗಳು ಕರ್ನಾಟಕ ಸಿವಿಲ್ ಸೇವಾ ನಿಯಮಗಳಿಗೆ ಒಳಪಡತಕ್ಕದ್ದು.

(3) ರಾಜ್ಯ ಸರ್ಕಾರವು, ತಾನು ಯುಕ್ತವೆಂದು ಭಾವಿಸುವಂಥ ಅವಧಿಗೆ ಆಯುಕ್ತನಿಗೆ ಗೈರು ಹಾಜರಾಗಲು ಅನುಮತಿ ನೀಡಬಹುದು.

**11. ಆಯುಕ್ತನ ಅಧಿಕಾರಗಳು ಮತ್ತು ಕರ್ತವ್ಯಗಳು.**– (1) ಆಯುಕ್ತನು, ಪ್ರಾಧಿಕಾರದ ಮುಖ್ಯ ಕಾರ್ಯನಿರ್ವಾಹಕ ಮತ್ತು ಆಡಳಿತಾಧಿಕಾರಿಯಾಗಿರತಕ್ಕದ್ದು.

(2) ಆಯುಕ್ತನು, ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಬರುವ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ತನಗೆ ಪ್ರದತ್ತವಾಗಿರುವಂತಹ ಪ್ರಕಾರ್ಯಗಳನ್ನು ನೆರವೇರಿಸುವುದರ ಜೊತೆಗೆ,–

(ಎ) ಪ್ರಾಧಿಕಾರದ ಗೊತ್ತುವಳಿಗಳನ್ನು ಕಾರ್ಯಗತಗೊಳಿಸತಕ್ಕದ್ದು;

(ಬಿ) ಪ್ರಾಧಿಕಾರದ ವ್ಯವಹಾರವನ್ನು ನಡೆಸುವುದು ಮತ್ತು ಪತ್ರ ವ್ಯವಹಾರವನ್ನು ನಡೆಸುವುದು;

(ಸಿ) ಸರ್ಕಾರವು ನಿರ್ದೇಶಿಸಬಹುದಾದಂಥ ಯೋಜನೆಗಳನ್ನು ಕಾರ್ಯಗತಗೊಳಿಸುವುದು ಮತ್ತು ಕಾಮಗಾರಿಗಳನ್ನು ನಿರ್ವಹಿಸುವುದು;

(ಡಿ) ಪ್ರಾಧಿಕಾರದ ಯೋಜನೆಗಳ ಅನುಷ್ಠಾನಕ್ಕೆ ಜವಾಬ್ದಾರರಾಗಿರತಕ್ಕದ್ದು.

(ಇ) ಪ್ರಾಧಿಕಾರದ ಬ್ಯಾಂಕ್ ಖಾತೆಗಳಲ್ಲಿ ವ್ಯವಹಾರ ನಡೆಸತಕ್ಕದ್ದು ಪ್ರಾಧಿಕಾರದ ಲೆಕ್ಕಪತ್ರಗಳನ್ನು ನಿರ್ವಹಿಸಲು ಜವಾಬ್ದಾರರಾಗಿರತಕ್ಕದ್ದು;

(ಎಫ್) ಪ್ರಾಧಿಕಾರದ ಅಧಿಕಾರಿಗಳು ಮತ್ತು ನೌಕರರ ಮೇಲೆ ಕಾರ್ಯನಿರ್ವಹಣೆಗೆ ಆಡಳಿತ ವಿಷಯಗಳು ಮತ್ತು ಅಂತಹ ಅಧಿಕಾರಿಗಳು ಮತ್ತು ನೌಕರರ ಸೇವಾ ವಿಷಯಗಳು ಹಾಗೂ ಅವರ ವೇತನ ಮತ್ತು ಭತ್ಯೆಗಳನ್ನು ವಿನಿಯಮನಗೊಳಿಸುವ ಬಗ್ಗೆ ಮೇಲ್ವಿಚಾರಣೆ ಹಾಗೂ ನಿಯಂತ್ರಣವನ್ನು ಹೊಂದಿರತಕ್ಕದ್ದು.

(ಜಿ) ಪ್ರಾಧಿಕಾರದ ಸಂಕ್ಷಿಪ್ತ ಟಿಪ್ಪಣಿಗಳ ಮತ್ತು ಯಾವುದೇ ವಿವರ ಪತ್ರದ ಪ್ರತಿಯನ್ನು ಅಥವಾ ರಾಜ್ಯ ಸರ್ಕಾರವು ಕಾಲಕಾಲಕ್ಕೆ ಕೋರಬಹುದಾದ ಇತರ ಮಾಹಿತಿಯನ್ನು ರಾಜ್ಯ ಸರ್ಕಾರಕ್ಕೆ ಒದಗಿಸತಕ್ಕದ್ದು.

(ಎಚ್) ಈ ಅಧಿನಿಯಮದ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನ ಮೂಲಕ ಅಥವಾ ಅದರ ಅಡಿಯಲ್ಲಿ ಆತನಿಗೆ ಪ್ರದತ್ತವಾದ ಅಂಥ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**12. ಪ್ರಾಧಿಕಾರದ ನೌಕರರು.**– (1) ನಿಯಮಿಸಬಹುದಾದಂತಹ ನಿಯಮಗಳಿಗೊಳಪಟ್ಟು ಪ್ರಾಧಿಕಾರವು, ಅಧಿನಿಯಮದ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಅದು ಅವಶ್ಯವೆಂದು ಭಾವಿಸುವಂತಹ ಸಂಖ್ಯೆಯ ನೌಕರರನ್ನು ನೇಮಕ ಮಾಡಿಕೊಳ್ಳಬಹುದು:

ಪರಂತು, ರಾಜ್ಯ ಸರ್ಕಾರವು ಭಾರತೀಯ ಲೆಕ್ಕ ಪರಿಶೋಧನೆ ಮತ್ತು ಲೆಕ್ಕ ಪತ್ರ ಸೇವೆಯಿಂದ ಅಥವಾ ಕರ್ನಾಟಕ ರಾಜ್ಯ ಲೆಕ್ಕಪತ್ರ ಸೇವೆಗಳಿಂದಾಗಲಿ "ಎ" ಗುಂಪಿನ ಕಿರಿಯ ವೇತನ ಶ್ರೇಣಿಯ ದರ್ಜೆಗಿಂತ ಕಡಿಮೆಯಲ್ಲದ ಅಧಿಕಾರಿಯನ್ನು ಪ್ರತಿನಿಯೋಜನೆಯ ಮೇಲೆ ಹಣಕಾಸು ಮತ್ತು ಲೆಕ್ಕಪತ್ರ ನಿಯಂತ್ರಣಾಧಿಕಾರಿಯಾಗಿ ನೇಮಕ ಮಾಡತಕ್ಕದ್ದು.

(2) ಹಣಕಾಸು ಮತ್ತು ಲೆಕ್ಕಪತ್ರ ನಿಯಂತ್ರಣಾಧಿಕಾರಿಯು ಆಯುಕ್ತನಿಗೆ ವರದಿ ಸಲ್ಲಿಸತಕ್ಕದ್ದು ಮತ್ತು ಪ್ರಾಧಿಕಾರದ ಹಣಕಾಸು ವ್ಯವಹಾರಗಳ ಬಗ್ಗೆ ವಾಸ್ತವಿಕವಾದ ಹಾಗೂ ನ್ಯಾಯವಾದ ಚಿತ್ರಣವನ್ನು ನೀಡುವ ಮೂಲಕ ಹಣಕಾಸು ನಿಯಮಗಳನ್ನು ಪಾಲಿಸಲಾಗುತ್ತಿದೆ ಮತ್ತು ಲೆಕ್ಕಪತ್ರಗಳನ್ನು ಅಂದಂದಿನವರೆಗೆ ನಿರ್ವಹಿಸಲಾಗುತ್ತಿದೆಯೆಂಬುದನ್ನು ಖಚಿತಪಡಿಸತಕ್ಕದ್ದು.

